ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 08 ನೇ ಡಿಸೆಂಬರ್, 2020

"ಬೆಲೆ ಸ್ಥಿರೀಕರಣ ಯೋಜನೆ" ಬಗ್ಗೆ

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು):-

142 (153) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕರ್ನಾಟಕವು ಕೃಷಿ ಉತ್ಪನ್ನಗಳ ವಿಕೇಂದ್ರೀಕೃತ ಖರೀದಿ/ಸಂಗ್ರಹಣೆ ರಾಜ್ಯ ಎಂಬುದು ನಿಜವೇ ರಾಜ್ಯ ಸರ್ಕಾರ ತನ್ನ ಏಜೆನ್ಸಿಗಳ ಮೂಲಕ ಭಾರತ ಸರ್ಕಾರದ ಪರವಾಗಿ ಭತ್ತ/ಒರಟಾದ ಧಾನ್ಯಗಳನ್ನು ಸಂಗ್ರಹಿಸುತ್ತಿದೆಯೇ; ಹಾಗಿದ್ದಲ್ಲಿ, ರಾಜ್ಯ ಸರ್ಕಾರದ ಖರೀದಿ ಏಜೆನ್ಸಿಗಳ ವಿವರಗಳನ್ನು ನೀಡುವುದು ;

(ಆ) ರಾಜ್ಯ ಸರ್ಕಾರ ಖಾರಿಫ್ ಅವಧಿಯಲ್ಲಿ ಕೃಷಿ ಉತ್ಪನ್ನಗಳನ್ನು ಖರೀದಿಸಲು ಹೊಂದಿರುವ ಗುರಿ ಮತ್ತು ಖರೀದಿ ಕೇಂದ್ರ ಸೇರಿದಂತೆ ಹಮ್ಮಿಕೊಂಡಿರುವ ವ್ಯವಸ್ಥೆ ಮತ್ತು ಯೋಜನೆಗಳ ವಿವರ ನೀಡುವುದು;

(ಇ) ಖಾರಿಫ್ ಬೆಳೆ ಕೊಯ್ಲು ಈಗಾಗಲೇ ಪ್ರಾರಂಭವಾಗಿರುವುದರಿಂದ ಕೃಷಿ ಉತ್ಪನ್ನ ಖರೀದಿ ಕೇಂದ್ರಗಳನ್ನು ತೆರೆಯುವಲ್ಲಿ ವಿಳಂಬವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ರಾಜ್ಯವು ದೇಶದ ಪ್ರಮುಖ ದ್ವಿದಳ ಧಾನ್ಯ ಬೆಳೆಯುವ ರಾಜ್ಯಗಳಲ್ಲಿ ಒಂದಾಗಿದ್ದು `ಕಲಬುರಗಿ ತೊಗರಿಬೇಳೆ (ಕೆಂಪುಗ್ರಾಂ)' ಯು ಜಾಗತಿಕ ಮಟ್ಟದಲ್ಲಿ ಅತ್ಯುತ್ತಮ ಗುಣಮಟ್ಟದಿಂದ ಕೂಡಿದೆಯೆಂದು ಪ್ರಖ್ಯಾತವಾಗಿದ್ದು, ಇತ್ತೀಚೆಗೆ ಸರ್ಕಾರದಿಂದ ಭೌಗೋಳಿಕ ಸೂಚಕ (ಜಿಐ) ಟ್ಯಾಗ್ ಅನ್ನು ಸ್ವೀಕರಿಸಿದ್ದು, ಗ್ರೀನ್ ಗ್ರಾಂ, ಬೆಂಗಾಲ್ ಗ್ರಾಂ, ಬ್ಲ್ಯಾಕ್ ಗ್ರಾಂ ಮತ್ತು ತುರ್ ದಾಲ್ ಮುಂತಾದ ದ್ವಿದಳ ಧಾನ್ಯಗಳನ್ನು ರಬಿ ಮತ್ತು ಖಾರಿಫ್ ಅವಧಿಯಲ್ಲಿ ಸಂಗ್ರಹಿಸುವ ಏಜೆನ್ಸಿಗಳು ಯಾವುವು ;

(ಉ) ಇತ್ತೀಚೆಗೆ "ಬೆಲೆ ಸ್ಥಿರೀಕರಣ ನಿಧಿ ಯೋಜನೆ" ಯಡಿ ಭಾರತೀಯ ಆಹಾರ ನಿಗಮ ವತಿಯಿಂದ ಇತರೆ ರಾಜ್ಯಗಳಂತೆ ದ್ವಿದಳ ಧಾನ್ಯಗಳ ಸಂಗ್ರಹವನ್ನು ಕೈಗೊಳ್ಳಲಾಗಿದೆಯೇ ? (ವಿವರ ನೀಡುವುದು)